# ಮರು ಓದು: ಹೊಸ ಶೋಧ

ಸಂಪಾದಕರು

ಡಾ. ಸುಮಾ ಆರ್.

ಗಗನ ಪ್ರಕಾಶನ

ನಂ. ೮೮೫/ಬಿ, ೧೭ನೇ ಕ್ರಾಸ್

ರಾಮಾನುಜ ರಸ್ತೆ, ಕೆ.ಆರ್. ಮೊಹಲ್ಲಾ

ಮೈಸೂರು–೫೭೦ ೦೦೪

# Maru Odu: Hosa Shodha

**Edited by:** Dr. Suma R.
Professor, BGS B School (SJBCMS)
BGS and SJB Group of Institutions
BGS Health and Education City
Kengeri, Bangalore-60, Mob: 9986200213, 7892747921

**Published by :** GAGANA PRAKASHANA
No. 883/B, 17th Cross, Ramanuja Road
K.R. Mohalla, Mysore-570 004

Inner Pages : Maplitho
Size : 1/8th Demmy
First impression : 2023
Pages: 176+iv = 180 Price: ₹ 210



ISBN: 978-81-954672-8-0

## ಮರು ಓದು: ಹೊಸ ಶೋಧ

ಪ್ರಥಮ ಮುದ್ರಣ: ೨೦೨೩
ಪುಟಗಳು: ೧೭೬+iv = ೧೮೦
ಬೆಲೆ: ₹ ೨೧೦
ಲೇಖನಗಳ ಹಕ್ಕು: ಆಯಾ ಲೇಖಕರದ್ದು
ಮುಖಪುಟ ವಿನ್ಯಾಸ: ಗಗನ ಗ್ರಾಫಿಕ್ಸ್
ಪ್ರಕಾಶನ: ಗಗನ ಪ್ರಕಾಶನ
ನಂ. ೮೮೩/ಬಿ, ೧೭ನೇ ಕ್ರಾಸ್, ರಾಮಾನುಜ ರಸ್ತೆ
ಕೆ.ಆರ್. ಮೊಹಲ್ಲಾ, ಮೈಸೂರು-೫೭೦ ೦೦೪
ಮುದ್ರಣ: ಶ್ರೀ ವಿನಾಯಕ ಪ್ರಿಂಟರ್ಸ್, ಮೈಸೂರು-೫೭೦ ೦೦೪



# ಪರಿವಿಡಿ


1. ಆದಿಪುರಾಣದಲ್ಲಿನ ಭರತಕ್ಷೇತ್ರ: ಒಂದು ನಕ್ಷಾ ಸಹಿತ ಅಧ್ಯಯನದ ಅವಶ್ಯಕತೆ – ಚಾಣಕ್ಯ ರಾಜ್ ಎಂ. 11
2. ಕನ್ನಡ ಸಾಹಿತ್ಯದಲ್ಲಿ ಛಂದಸ್ಸಿನ ಅವಶ್ಯಕತೆ: ಒಂದು ಲಕ್ಷಣ ಮೀಮಾಂಸೆ – ಮೂರ್ತಿ ಐ.ಆರ್. 23
3. ವಿಜಯಾದಬ್ಬೆಯವರ ಕಾವ್ಯಗಳಲ್ಲಿ ಕಾಣಬರುವ ಸಾಮಾಜಿಕ ಕಳಕಳಿ – ವಿಜಯಲಕ್ಷ್ಮಿ ಡಿ. 30
4. ಮಹಿಳೆ ಎದುರಿಸುತ್ತಿರುವ ಸವಾಲುಗಳು – ದುರ್ಗಾದೇವಿ ಜಿ. 36
5. ಬುಡಕಟ್ಟು ಜನಾಂಗಗಳಲ್ಲಿ ವೈದ್ಯ ಪದ್ಧತಿ – ತಿಮ್ಮೇಗೌಡ ಬಿ.ಪಿ. 44
6. ಕಂಬಾರರ ಶಿವರಾತ್ರಿ ನಾಟಕದಲ್ಲಿ ಸಾಮಾಜಿಕ ಸಂಘರ್ಷ – ಮನೋಹರ್ ಎಂ. 53
7. ಬೆಸಗರಹಳ್ಳಿ ರಾಮಣ್ಣನವರ ಕಥೆಗಳ ವಿಶ್ಲೇಷಣೆ – ಮಮತ ವಿ. 59
8. ವಿ.ಕೃ. ಗೋಕಾಕ್ ಅವರ ಕಾದಂಬರಿಯಲ್ಲಿ ಪರಂಪರೆ – ಭೋಜೇಗೌಡ 65
9. ಕನ್ನಡ ಸಾಹಿತ್ಯದಲ್ಲಿ ಹಾಸ್ಯ – ಮುಜಾಯಿದ್ ಪಾಷಾ 72
10. ರಾಘವೇಂದ್ರ ಖಾಸನೀಸರ ತಬ್ಬಲಿಗಳು – ಅಮರನಾಥ್ ಎನ್. 82
11. ಪರಮಹಂಸ ಗಟ್ಟಿಹಳ್ಳಿ ಆಂಜಿನಪ್ಪ ಸ್ವಾಮಿಗಳು – ಅಶ್ವತ್ಥ 87
12. ಕರ್ನಾಟಕದಲ್ಲಿರುವ ಬುಡಕಟ್ಟುಗಳು – ಪ್ರಸನ್ನ 93
13. ಸಿ. ಆರ್. ಪಟ್ನ ತಾಲ್ಲೂಕಿನ ಜಿನ್ನೇನಹಳ್ಳಿಯಲ್ಲಿ ಭಾಗವಂತಿಕೆ ಸಂಪ್ರದಾಯ – ಉಮೇಶ ಹೆಚ್. ಜಿ. 101

14. ಕುವೆಂಪು ಕಥಾ ಸಾಹಿತ್ಯ: ಒಂದು ಅವಲೋಕನ 112
– ರಾಧಿಕ ಎಸ್.
15. ವಚನ ಸಾಹಿತ್ಯದ ಉಗಮ ಮತ್ತು ಬೆಳವಣಿಗೆ 118
– ನಾಗೇಂದ್ರ ಹೆಚ್. ಜಿ.
16. ವಚನಗಳಲ್ಲಿ ಮೂಢನಂಬಿಕೆಗಳು 126
– ಪ್ರೊ. ಪುಷ್ಪ, ಎಂ.
17. ಜೇಡರ ದಾಸಿಮಯ್ಯನ ವಚನಗಳ ಮೌಲ್ಯ 134
– ಮಂಜುನಾಥ ಡಿ.ಆರ್.
18. ವಚನಕಾರ್ತಿಯರ ವಚನಗಳ ವೈಶಿಷ್ಟ್ಯತೆ 142
– ಉಮೇಶ್ ಬಿ.ಆರ್.
19. ಕನ್ನಡ ಸಾಹಿತ್ಯದಲ್ಲಿ ಮನುಷ್ಯ ಮತ್ತು ಮಾನವತ್ವ 150
– ಪ್ರಕಾಶ ಬಿ.
20. ಡಿ.ವ್ಹಿ.ಜಿ.ಯವರ 'ಮಂಕುತಿಮ್ಮನ ಕಗ್ಗ'ದಲ್ಲಿ ವೈಚಾರಿಕ ಪ್ರಜ್ಞೆ 156
– ಸುಮ ವೈ.ಎನ್.
21. ಕರಿಯ ಕಂಬಳಿ ಮತ್ತು ಇತರೆ ಕಥೆಗಳು: ಕೆಲವು ಕಥೆಗಳ ವಿಶ್ಲೇಷಣೆ – ಸುಂದ್ರೇಶ್ ಕೆ.ಎಸ್. 163
22. ಅಸಂಗತ ನಾಟಕಗಳ ಸ್ವರೂಪ 172
– ಅನ್ನಪೂರ್ಣ ವಿ.

# 21. ಕರಿಯ ಕಂಬಳಿ ಮತ್ತು ಇತರೆ ಕಥೆಗಳು: ಕೆಲವು ಕಥೆಗಳ ವಿಶ್ಲೇಷಣೆ

ಸಂಶೋಧನಾರ್ಥಿ: ಸುಂದ್ರೇಶ್ ಕೆ.ಎಸ್.

ಭ್ರಮರ ಎಂಬ ಕಾವ್ಯನಾಮದಿಂದ ಪ್ರಸಿದ್ಧರಾದ ಜಿ.ಪಿ. ರಾಜರತ್ನಂ ಅವರು ಹಳಗನ್ನಡದಲ್ಲಿ ಪರಿಣಿತರಾದರೂ, ಹಳೆ–ಹೊಸಗನ್ನಡದ ನಡುವೆ ಸೇತುವೆಯಾದವರು. ಎಳೆಯರ ತಿಳಿ ಹಾಸ್ಯದಿಂದ ಹಿಡಿದು ಮುದುಕರವರೆಗೂ ಚಿಂತನೆಯನ್ನು ಮೂಡಿಸಿದವರು. ತಮ್ಮನ್ನು ತಾವೇ ಸಾಹಿತ್ಯ ಪರಿಚಾರಕರು ಎಂದು ಕರೆದುಕೊಳ್ಳುತ್ತಾ, ಕನ್ನಡ ಸಾಹಿತ್ಯದ ಗಮನಾರ್ಹ ಕೊಡುಗೆ ನೀಡಿದವರು. ಇವರು ಹಲವು ಭಾಷೆಗಳಲ್ಲಿ ಪರಿಣತಿ ಹೊಂದಿದ್ದು, 200ಕ್ಕೂ ಹೆಚ್ಚು ಕೃತಿಗಳನ್ನು ಬರೆದಿದ್ದಾರೆ. ಈ ಕೃತಿಗಳಲ್ಲಿ 'ಕರಿಯ ಕಂಬಳಿ ಮತ್ತು ಇತರ ಕಥೆಗಳು' ಎಂಬ ಕೃತಿಯ ಕೆಲವೊಂದು ಕಥೆಗಳನ್ನು ಆಯ್ದುಕೊಂಡು ಸಂಶೋಧನೆಗೊಳಪಡಿಸಲು ಪ್ರಯತ್ನಿಸಲಾಗಿದೆ.

1965 ರಲ್ಲಿ ಪ್ರಕಟವಾದ 'ಕರಿಯ ಕಂಬಳಿ ಮತ್ತು ಇತರ ಕಥೆಗಳು' ಕಥಾಸಂಕಲನದಲ್ಲಿ ಒಟ್ಟು ಹದಿಮೂರು ಕಥೆಗಳಿವೆ. ಮೊದಲ ಎಂಟು ಕಥೆಗಳು ಜಿ. ಪಿ. ರಾಜರತ್ನಂ ಅವರ ಸ್ವಂತ ರಚನೆ, ಒಂಬತ್ತನೆ ಕಥೆ ರಷ್ಯನ್ ಕಥೆಯ ರೂಪಾಂತರ. ಕೊನೆಯ ನಾಲ್ಕು ಫ್ರಾನ್ಸ್ ದೇಶದ ಮಹಾ ವಿಡಂಬನ ಕಥಾ ಸಾಹಿತಿಯೂ ರಾಜಕರಣಿಯೂ ಆದ ವಾಲ್ಟರ್ ಕವಿಯ ನಾಲ್ಕು ಕಥೆಗಳ ಅನುವಾದವಾಗಿವೆ. ಈ ಕಥೆಗಳಲ್ಲಿ ಮೂಲವೆಲ್ಲಕ್ಕೂ ಮನಸು, ಅವಳ ಗಂಡ, ಮಾಮಣ್ಣ, ಒಲವೋ? ಕುಲವೋ? ಎಂಬ ಕಥೆಗಳನ್ನು ವಿಮರ್ಶೆಗೆ ಒಳಪಡಿಸಲಾಗಿದೆ.

1. ಮೂಲವೆಲ್ಲಕ್ಕು ಮನಸು: ಮೂಲವೆಲ್ಲಕ್ಕು ಮನಸು ಎಂಬ ಕತೆಯಲ್ಲಿ ಮನಸ್ಸಿನ ಶುದ್ಧತೆಯ ಬಗೆಗೆ ಅರಿವು ಮೂಡಿಸುವ ಪ್ರಯತ್ನ ಮತ್ತು ನಮ್ಮ ಜೀವನದ ಸಂದರ್ಭ, ಸನ್ನಿವೇಶಗಳಿಗೆ ನಮ್ಮ ಯೋಚನೆಗಳೇ ಕಾರಣ ಎಂಬುದನ್ನು ಸಷ್ಟಪಡಿಸುವ ಪ್ರಯತ್ನವನ್ನು ಮಾಡಲಾಗಿದೆ. ಮನುಷ್ಯ ತಾನು ಮಾಡುವ ಕಾರ್ಯಗಳು,

ಯೋಚನೆಗಳು ಅವನನ್ನು ಯಾವ ಮಟ್ಟಕ್ಕೆ ಕೊಂಡೊಯ್ಯುತ್ತದೆ ಎಂಬುದನ್ನು ಈ ಕತೆಯ ಮೂಲಕ ತಿಳಿಯಬಹುದಾಗಿದೆ. ಈ ಕಥೆಯಲ್ಲಿ ಈ ಭೂಮಿಯ ಮೇಲೆ ಅನೇಕ ಜನರಿಂದ ಪೂಜಿಸಲ್ಪಡುವ ಬುದ್ಧನ ಅನುಯಾಯಿಗಳಾದ ಬೌದ್ಧ ಧರ್ಮ ಆಚರಣೆಕಾರರ ಇಬ್ಬರು ಬೌದ್ಧ ಸನ್ಯಾಸಿಗಳ ಜೀವನದಿಂದ ಜನರಿಗೆ ಮನಸ್ಸಿನ ಶುದ್ಧತೆ, ಆಲೋಚನೆಗಳು ಎಷ್ಟು ಮುಖ್ಯ ಎಂಬುದನ್ನು ಕಂಡುಕೊಳ್ಳಬಹುದಾಗಿದೆ.

ರಾಜರ ಅರಮನೆಯ ಬಳಿಯ ಪರ್ವತ ಬುದ್ಧನ ಪಾದದ ಧೂಳಿನಿಂದ ಪುನೀತವಾದ ಗಿರಿ ಇದೆ. ಬುದ್ಧನ ಪಾದದ ಧೂಳು ಪವಿತ್ರ ಎಂದೆನ್ನಲು ಅದಕ್ಕೆ ಅವನ ಕಾರ್ಯಗಳು, ಅವನ ಯೋಚನೆಗಳು ಕಾರಣವಾಗುತ್ತದೆ. ಆ ಗಿರಿಯಲ್ಲಿರುವ ಇಬ್ಬರು ಸನ್ಯಾಸಿಗಳು ಒಬ್ಬರನ್ನೊಬ್ಬರು ನೋಡಿಕೊಳ್ಳದೆ, ಮೋಕ್ಷ ಸಾಧನೆಗಾಗಿ ವರ್ಷಗಳಿಂದ ತಪಸ್ಸು ಮಾಡುತ್ತಿದ್ದಾರೆ. ಆ ಸನ್ಯಾಸಿಗಳ ಸಂಯಮದ ತಪಸ್ಸಿಗೆ ಸೋತ ಜನರು ಅವನ ಬಳಿಯ ಸಂಪತ್ತನ್ನು ಅವರಲ್ಲಿಗೆ ತಂದಿಡುತ್ತಿದ್ದಾರೆ. ಆ ಬೌದ್ಧ ಸನ್ಯಾಸಿಗಳನ್ನು ಪರೀಕ್ಷಿಸಲೋ ಅಥವಾ ಅವರ ಮನಸ್ಸಿನ ಶುದ್ಧತೆಯನ್ನು ಅರಿಯಲು ರಾಗಗಳ ಅಧಿದೇವತೆ ಮನ್ಮಥ ಅವರಿಬ್ಬರನ್ನು ಎಚ್ಚರಗೊಳಿಸುತ್ತಾನೆ. ತಕ್ಷಣ ಅವರಿಬ್ಬರು ಎದ್ದು ಅವರಲ್ಲಿನ ಸಂಪತ್ತನ್ನು ತೆಗೆದುಕೊಂಡು ರಾಜನ ಅರಮನೆಗೆ ಬಂದು ಆ ಸಂಪತ್ತನ್ನು ಹಂಚಿ, ಅಲ್ಲಿ ನಾಸ್ತಿಕರೊಡನೆ ನಲಿದು, ಭಕ್ಷ್ಯಭೋಜನಗಳನ್ನು ಸ್ವೀಕರಿಸಿ, ಸ್ತೂಪಗಳನ್ನು ಸಂದರ್ಶಿಸಿ, ಅಮೃತವಾಣಿಯನ್ನು ಕೇಳಿ, ಹಾಡಿನಲಿದು ಹಿಂತಿರುಗಿ ಗಿರಿ ಪರ್ವತದತ್ತ ಬರುತ್ತಾರೆ. ಅವರಿಬ್ಬರಲ್ಲಿ ಒಬ್ಬ ಜಿನಪುತ್ರ ಮತ್ತು ದೇವಪುತ್ರ. ದೇವಪುತ್ರ ಇಷ್ಟುದಿನ ಮಾಡಿದ ತಪಸ್ಸೆಲ್ಲ ಇಲ್ಲಿಗೆ ವ್ಯರ್ಥವಾಯಿತಲ್ಲ. ನಾವು ಅನಾಚಾರಗಳನ್ನು ಮಾಡಿದೆವಲ್ಲ ಎಂದು ಮರುಗುತ್ತಿದ್ದಾನೆ. ತಾವು ಮಾಡಿದ ಒಳ್ಳೆಯ ಕೆಲಸಗಳನ್ನು ಮತ್ತು ತಾವುಗಳು ಅನುಭವಿಸಿದ ಸಂತೋಷವನ್ನು ತಪ್ಪೆಂದು ಭಾವಿಸಿ, ಇಷ್ಟು ದಿನ ಮಾಡಿದ ತಪಸ್ಸೆಲ್ಲ ವ್ಯರ್ಥವಾಗಿದೆ ಎಂದು, ಇನ್ನೂ ಈ ತಪಸ್ಸಿಗೆ ಅರ್ಥವಿಲ್ಲವೆಂದು, ಕೆಟ್ಟಕಾರ್ಯಗಳನ್ನು ಮಾಡಿ ಮೋಕ್ಷ ಪಡೆಯದೆ ಸಾಯುತ್ತಾನೆ. ಆದರೆ ಜಿನಪುತ್ರ ತಪಸ್ಸನ್ನು ಕೈಗೊಂಡು ಶುದ್ಧ ಮನಸ್ಸಿನಿಂದ ಶಕ್ತಿಗಳನ್ನು ಪಡೆದು ಜನರಿಂದ ಪೂಜಿಸಲ್ಪಡುತ್ತಾನೆ. ಇಬ್ಬರು ಸನ್ಯಾಸಿಗಳು ತಮ್ಮ ಯೋಚನೆಗಳಿಂದ ಇಂತಹ ಸ್ಥಿತಿಯನ್ನು ತಲುಪುತ್ತಾರೆ ಎಂಬುದನ್ನು ಸ್ಪಷ್ಟಪಡಿಸಲಾಗಿದೆ. ಅವರವರ ಜೀವನದ ಸ್ಥಿತಿಗಳಿಗೆ ಅವರವರ ಯೋಚನೆಗಳು, ಕಾರ್ಯಗಳು ಕಾರಣವಾಗುತ್ತವೆ. ದೇವಪುತ್ರ ಸನ್ಯಾಸಿಯಾಗಿ ಕೆಲ ಕ್ಷಣಗಳ ಕಾಲ ಸಂತೋಷವಾಗಿ, ದಾನಧರ್ಮಗಳನ್ನು ಮಾಡಿದ್ದು ತಪ್ಪು, ಅನಾಚಾರ ಎಂದು ಭಾವಿಸಿ ಈ ಸನ್ಯಾಸತ್ವಕ್ಕೆ ಇಷ್ಟು ದಿನ ಮಾಡಿದ ತಪಸ್ಸಿಗೆ ಫಲವಿಲ್ಲ ಎಂದು ಯೋಚಿಸಿ ಅಧರ್ಮದ ದಾರಿಯಲ್ಲಿ ಸಾಗಿ ಸಾಯುತ್ತಾನೆ. ಅದೇ ಜಿನಪುತ್ರ ತನ್ನ

ಧರ್ಮದ ದಾರಿಯಲ್ಲಿ ಸಾಗಿ ಸರ್ವಜನರಿಂದಲೂ ಪೂಜಿಸಲ್ಪಡುತ್ತಾನೆ. ಯಾವುದೇ ಮನುಷ್ಯ ಧರ್ಮದ ದಾರಿಯಲ್ಲಿ ಸಾಗಿದರೆ ಜೀವನ ಸಾಕ್ಷಾತ್ಕಾರವಾಗುತ್ತದೆ. ಅವನ ಸ್ಥಿತಿಗತಿಗಳಿಗೆ ಅವನ ಮನಸ್ಸು ಕಾರಣವಾಗಿರುತ್ತದೆ ಎಂಬುದನ್ನು ಈ ಕಥೆಯಲ್ಲಿ ತಿಳಿಸಲಾಗಿದೆ.

2. ಅವಳ ಗಂಡ: ಮನುಷ್ಯನ ಅದರಲ್ಲಿಯೂ ಒಬ್ಬ ಅವಿದ್ಯಾವಂತನ ಮನಸ್ಥಿತಿಯನ್ನು ಅವಳ ಗಂಡ ಎಂಬ ಕತೆಯಲ್ಲಿ ತಿಳಿಯಬಹುದು. ಒಬ್ಬ ಹೆಂಗಸಿನ ದೈಹಿಕ ಚಹರೆಯನ್ನು ಆಧರಿಸಿ ಅವಳ ಮನಸ್ಥಿತಿಯನ್ನು ನಿರ್ಧಾರ ಮಾಡುವ ಕ್ರೂರತೆ ಇಲ್ಲಿ ಕಂಡುಬರುವುದನ್ನು ನೋಡಬಹುದು. ಇಲ್ಲಿ ತಾರಾ ಎನ್ನುವ ಹೆಂಗಸು ಎತ್ತರವಾಗಿದ್ದಾಳೆ, ಕಪ್ಪಾಗಿದ್ದಾಳೆ, ದಪ್ಪಗಿದ್ದಾಳೆ. ಅವಳ ಧ್ವನಿ ಗಡಸು ಎಂದು ಅವಳ ದೈಹಿಕ ಚಹರೆಯನ್ನು ನೋಡಿ ಅವಳು ಒಬ್ಬಳು ಮನಸ್ಸಿರುವ ಮನುಷ್ಯಳು ಎಂದು ಅರ್ಥೈಸಿಕೊಳ್ಳದೆ, ಅವಳನ್ನು ಕೀಳಾಗಿ ಕಂಡು ಮಾನಸಿಕ ಹಿಂಸೆಗೆ ದೂಡುತ್ತದೆ. ಪ್ರಪಂಚದಲ್ಲಿರುವ ಪ್ರತಿಯೊಂದು ಪ್ರಾಣಿಯೂ ಕೂಡ ತನ್ನದೆ ಆದ ದೈಹಿಕ ಸೌಂದರ್ಯವನ್ನು ಹೊಂದಿದೆ. ಅದು ನಿಸರ್ಗದತ್ತ ಕೊಡುಗೆಯಾಗಿರುತ್ತದೆ. ಎಲ್ಲ ಮನುಷ್ಯರು ತಮ್ಮದೇ ಆದ ರೀತಿಯಲ್ಲಿ ಸುಂದರವಾಗಿರುತ್ತಾರೆ. ಮನುಷ್ಯ ಮಾನಸಿಕವಾಗಿ ಪ್ರಪಂಚವನ್ನು ಸ್ವೀಕರಿಸಿ, ಪ್ರಕೃತಿಯನ್ನು ಒಪ್ಪಿಕೊಂಡರೆ ಇಡೀ ಜಗತ್ತೇ ಸುಂದರವಾಗಿ ಕಾಣಿಸುತ್ತದೆ. ಬದಲಾಗುತ್ತಿರುವ ನಾಗರೀಕ ಸಮಾಜದಲ್ಲಿ ದೈಹಿಕ ಸೌಂದರ್ಯಕ್ಕೆ ಹೆಚ್ಚು ಗಮನಕೊಟ್ಟು, ಮಾನಸಿಕವಾಗಿ ಮನುಷ್ಯರನ್ನು ಹಿಂಸಿಸುವ ಪರಿಸ್ಥಿತಿಗೆ ನಾವು ಬಂದು ನಿಂತು, ದೇಹದ ಬಣ್ಣಕ್ಕೆ ಮಾರು ಹೋಗಿದ್ದೇವೆ. ಹಾಗಾದರೆ ಮನುಷ್ಯ ಆಂತರಿಕ ಸೌಂದರ್ಯಕ್ಕೆ ಬೆಲೆ ಕೊಡುವುದು ಯಾವಾಗ ಎಂಬ ಪ್ರಶ್ನೆ ಉದ್ಭವಿಸುವಂತೆ ಮಾಡುತ್ತದೆ ಎಂಬ ಚಿಂತನೆಗೆ ಓದುಗರನ್ನು ದೂಡುತ್ತದೆ.

ತಾರಾ ಗಂಡಸರನ್ನು ಕಲ್ಪಿಸಿಕೊಂಡು ಅವನನ್ನು ತನ್ನ ಗಂಡ ಎಂದು ಪತ್ರ ಬರೆಸಿ ಇಟ್ಟುಕೊಳ್ಳುವಷ್ಟು ಮನನೊಂದಿದ್ದಾಳೆಂದರೆ ಸಮಾಜ ಅವಳನ್ನು ಹೇಗೆ ಕಂಡಿದೆ ಎಂಬುದು ತಿಳಿಯುತ್ತದೆ. ಒಬ್ಬ ವ್ಯಕ್ತಿಯ ವ್ಯಕ್ತಿತ್ವವನ್ನು ಅವನ ದೈಹಿಕ ಚಹರೆ, ಅವನ ಉಡುಗೆ ತೊಡುಗೆಯಿಂದ ನಿರ್ಧರಿಸುವ ಸಮಾಜದಲ್ಲಿ ಬದುಕುತ್ತಿರುವ ಈ ಹೆಂಗಸಿನ ಮನಸ್ಸು ತನ್ನನ್ನು ಅರ್ಥೈಸಿಕೊಳ್ಳುವ ಮತ್ತೊಂದು ಮನಸ್ಸನ್ನು ಹುಡುಕುವಲ್ಲಿ ಎಷ್ಟು ಚಡಪಡಿಸುತ್ತದೆ ಎಂಬುದನ್ನು ಮನದಟ್ಟು ಮಾಡಿಕೊಳ್ಳಬೇಕಿದೆ.

ಒಬ್ಬ ಹೃದಯವಂತ ಹುಡುಗ ಆ ಹೆಂಗಸನ್ನು ಎಷ್ಟು ವ್ಯಂಗ್ಯವಾಗಿ ಮಾತನಾಡಿಸುತ್ತಾನೆ. ಅವಳನ್ನು ನೋಡಿದರೆ ಆ ಹುಡುಗನಿಗೆ ಮನಸ್ಸಿನಲ್ಲಿ ಮೂಡುವ ಯೋಚನೆಗಳು ಎಷ್ಟು ಕೀಳಾಗಿವೆ. ಪ್ರತಿಯೊಬ್ಬರು ತಮ್ಮದೆ ಆದ ದೈಹಿಕ ಚಹರೆಯನ್ನು ಹೊಂದಿರುತ್ತಾರೆ. ಇದನ್ನು ಬದಲಾಯಿಸಲು ಯಾರಿಂದಲೂ

ಸಾಧ್ಯವಿಲ್ಲ. ಪ್ರಕೃತಿಯ ನಿಯಮವನ್ನು ಸ್ವೀಕರಿಸಿ ಮಾನಸಿಕ ದೃಷ್ಟಿಯಿಂದ ಎಲ್ಲವನ್ನು ವೀಕ್ಷಿಸಿದರೆ ಎಲ್ಲವೂ ನಮಗೆ ಬೇಕಾದಂತೆ ಚಿತ್ರಿಸಿಕೊಳ್ಳಬಹುದು. ಆಧುನಿಕತೆಯ ಜಗತ್ತಿನಲ್ಲಿ ಮನುಷ್ಯನ ಮನಸ್ಥಿತಿ ಎಂತಹ ವಿಕೋಪಕ್ಕೆ ಇಳಿದಿದೆ ಅಲ್ಲವೆ?

ಒಬ್ಬ ವ್ಯಕ್ತಿಯ ವ್ಯಕ್ತಿತ್ವಕ್ಕಿಂತ ಆತ ದೈಹಿಕವಾಗಿ ಹೇಗೆ ಕಾಣುತ್ತಾನೆ ಎಂಬುದನ್ನು ನಿರೀಕ್ಷೆ ಮಾಡುತ್ತೇವೆ. ಇದರಿಂದ ಅಷ್ಟು ಜನರು ಮಾನಸಿಕ ಅನಾರೋಗಕ್ಕೆ (ವಿಸ್ಮೃತಿ) ತುತ್ತಾಗುತ್ತಿದ್ದಾರೆ. ತಾರಾಗೆ ಸಮಾಜದಲ್ಲಿ ಸಿಕ್ಕ ಪ್ರತಿಕ್ರಿಯೆ ಅವಳು ಕಲ್ಪನಾ ಲೋಕದಲ್ಲಿ ತನಗೂ ಒಬ್ಬ ಗಂಡನಿದ್ದಾನೆ ಎಂದು ಊಹಿಸಿಕೊಳ್ಳುವಷ್ಟರ ಮಟ್ಟಿಗೆ ಯಾತನೆ ಅನುಭವಿಸುವಂತಾಗಿದೆ. ಒಂದು ಕಾಗದ ಅವಳ ಸಂತೋಷಕ್ಕೆ ಕಾರಣವಾಗಿದೆ. ಪ್ರಕೃತಿಯ ನಿಯಮವನ್ನು ಮನುಷ್ಯ ಸ್ವಾಗತದ ಭಾವದಿಂದ ಸ್ವೀಕರಿಸಿದರೆ ಇಂತಹ ಘಟನೆಗಳಿಗೆ ಸಮಾಜದಲ್ಲಿ ಜಾಗವೇ ಇರುವುದಿಲ್ಲ. ದೈಹಿಕ ಸೌಂದರ್ಯಕ್ಕಿಂತ ಮಾನಸಿಕ ಸೌಂದರ್ಯವೇ ಮುಖ್ಯವಾಗಬೇಕು. ಎಲ್ಲವನ್ನು ವಿಶಾಲ ದೃಷ್ಟಿಯಿಂದ ನೋಡುವ ಮನಸ್ಥಿತಿಯನ್ನು ಬೆಳೆಸಿಕೊಳ್ಳಬೇಕಿದೆ.

3. ಮಾಮಣ್ಣ: ಮಾಮಣ್ಣ ಎಂಬ ಕತೆಯು ಮನುಷ್ಯ ತನ್ನ ಅತಿಯಾದ ಆಲೋಚನೆಗಳಿಂದ ಎಂತಹ ದುಃಸ್ಥಿತಿಗೆ ತಲುಪುತ್ತಾನೆ ಎಂಬ ತಿರುಳನ್ನು ಒಳಗೊಂಡಿದೆ. ಮನುಷ್ಯ ತನ್ನ ಮನಸ್ಸಿನಲ್ಲಿ ಅಂದುಕೊಂಡರೆ ಸಾಲದು. ಅಂದುಕೊಂಡಂತೆ ನಡೆದುಕೊಳ್ಳಬೇಕು. ಅದಕ್ಕಾಗಿ ಮಾಮಣ್ಣ ತಾನು ಹೆಂಗಸರಿಗೆ ಮಾರು ಹೋಗಬಾರದು ಎಂದು ಯೋಚಿಸುತ್ತಾನೆ. ತನ್ನ ವಿವೇಕದಿಂದ ಮದ್ಯವ್ಯಸನಿಯಾಗಬಾರದೆಂದು ಯೋಚಿಸುತ್ತಾನೆ. ಆದರೆ ಅದರಂತೆ ನೆಡೆದುಕೊಳ್ಳುವುದಿಲ್ಲ. ಅವನು ಯೋಚನೆ ಮಾಡುವುದಕ್ಕಿಂತ ಅತಿಯಾದ ಚಿಂತೆ ಮಾಡುತ್ತಾನೆ. ಅದೂ ಅಲ್ಲದೆ ತನ್ನ ಬುದ್ಧಿಮಂದತೆಗೆ ಹೆಣ್ಣು ಮಕ್ಕಳೇ ಕಾರಣ ಎಂದು ಯೋಚಿಸುತ್ತಾನೆ. ಹೆಣ್ಣು ಮಕ್ಕಳ ಸೌಂದರ್ಯವನ್ನು ಊಹಿಸಿಕೊಂಡು ಹೆಣ್ಣನ್ನು ತ್ಯಜಿಸುವ ಮನಸ್ಥಿತಿಗೆ ಬರುತ್ತಾನೆ.

ಮಾಮಣ್ಣನು ಆರ್ಥಿಕವಾಗಿ ಸುಸ್ಥಿರವಾಗಿ, ಸಮಾಜದಲ್ಲಿ ಒಳ್ಳೆ ವ್ಯಕ್ತಿಯಾಗಿ ಬಾಳಬೇಕು ಎಂದು ಅಪೇಕ್ಷೆ ಪಡುತ್ತಾನೆ. ಅಂತೆಯೇ ತನ್ನಲ್ಲಿರುವ ಸಂಪತ್ತನ್ನು ಕಳೆಯಬಾರದು ಅದನ್ನು ಹಾಗೆ ಉಳಿಸಿಕೊಳ್ಳಬೇಕು. ಸ್ನೇಹಿತರನ್ನು ಕಳೆದುಕೊಳ್ಳಬಾರದು. ಅದಕ್ಕಾಗಿ ತಾನು ರಾಗ ದ್ವೇಷಗಳಿಗೆ ಒಳಗಾಗದೆ ಇದ್ದರೆ ಇವೆಲ್ಲ ಸಾಧ್ಯವಾಗುತ್ತದೆ. ಇದೇನೂ ಕಷ್ಟವಿಲ್ಲ ಎಂದು ನಿರ್ಧರಿಸುತ್ತಾನೆ. ಆದರೆ ಇವನದು ಕಷ್ಟವನ್ನು ನೋಡಿ ಕರಗುವ ಹೃದಯ. ಒಬ್ಬಳು ಹೆಣ್ಣು ಮಗಳು ಕಷ್ಟದಲ್ಲಿರುವುದನ್ನು ನೋಡಿ ಸಹಾಯ ಮಾಡಲು ಹೋಗಿ ಅವಳಿಗೆ ಮನಸೋತು ಅವಮಾನಿತನಾಗಿ ತನ್ನ ಆಭರಣಗಳನ್ನು ಕಳೆದುಕೊಂಡು ದುಃಖಿತನಾಗುತ್ತಾನೆ.

ತನ್ನನ್ನು ತಾನು ನಿಯಂತ್ರಣದಲ್ಲಿಟ್ಟುಕೊಳ್ಳುವಲ್ಲಿ ಮಾಮಣ್ಣ ಎಡುಕುತ್ತಾನೆ. ತನ್ನ ದುಃಖವನ್ನು ಸ್ನೇಹಿತರೊಂದಿಗೆ ಮರೆಯುವ ಪ್ರಯತ್ನದಲ್ಲಿ ಮದ್ಯ ಸೇವಿಸಿ ತನ್ನ ಬಳಿಯ ಆಸ್ತಿಯನ್ನು ನಷ್ಟ ಮಾಡಿಕೊಳ್ಳುತ್ತಾನೆ. ಜಗಳದಲ್ಲಿ ಕಣ್ಣನ್ನು ಕಳೆದುಕೊಳ್ಳುತ್ತಾನೆ. ಸಾಲಗಾರರು ಮನೆಯ ವಸ್ತುಗಳನ್ನು ಹರಾಜಿಗೆ ಹಾಕುತ್ತಾರೆ. ಅವನು ದಿವಾಳಿಯಾಗುತ್ತಾನೆ. ತನ್ನ ನಷ್ಟವನ್ನು ಅರಸರ ಬಳಿಗೆ ಬಂದು ಹೇಳುತ್ತಾನೆ, ಏನೂ ಪ್ರಯೋಜನವಾಗುವುದಿಲ್ಲ. ಕೆಟ್ಟಮೇಲೆ ಬುದ್ಧಿ ಬಂತು ಎನ್ನುವ ಗಾದೆಯಂತೆ ಮಾಮಣ್ಣ ಸ್ತ್ರೀಯರಿಗೆ ಸಿಕ್ಕಬಾರದು, ಮಿತಿಮೀರಿ ಕುಡಿಯಬಾರದು ಎಂದು ನಿಶ್ಚಯಿಸುತ್ತಾನೆ. ತನ್ನ ಮನೆಯ ಮುಂದೆ ಕುಳಿತುಕೊಳ್ಳುತ್ತಾನೆ. ಆ ಸ್ಥಿತಿಯನ್ನು ಕಂಡು ಮೋಸ ಮಾಡಿದವರು ನಗುತ್ತಾರೆ.

ಒಟ್ಟಾರೆ ಸಮಾಜದಲ್ಲಿ ಸಂಪತ್ತಿರುವವರಿಗೆ ಹೆಚ್ಚು ಬೆಲೆ ಎಂಬುದು ಗೊತ್ತಾಗುತ್ತದೆ. ಮಾಮಣ್ಣನ ಕನಸಿನಲ್ಲಿ ದೇವಚೇತನ ಬಂದು ಇಂತಹ ಮೋಸಗಳೇ ಇಲ್ಲದ ಒಂದು ಪ್ರಪಂಚವಿದೆ ಎಂದು ಹೇಳುತ್ತದೆ. ಆದರೆ ಅವನು ನನ್ನ ಕಣ್ಣಾರೆ ನೋಡುವವರೆಗೂ ನಂಬುವುದಿಲ್ಲ ಎನ್ನುತ್ತಾನೆ. ಒಟ್ಟಾರೆ ಸಮಾಜದಲ್ಲಿ ವ್ಯಕ್ತಿಗಿಂತ ಅವನ ಬಳಿ ಇರುವ ಸಂಪತ್ತಿಗೆ ಬೆಲೆ, ಗೌರವ ಜಾಸ್ತಿ ಎಂಬುದು ಗೊತ್ತಾಗುತ್ತದೆ. ಹಾಗೆ ಯಾವುದೇ ಕೆಲಸವನ್ನು ಯೋಚಿಸಿ ಮಾಡಬೇಕು, ನಮ್ಮ ಮೇಲೆ ನಾವು ನಿಯಂತ್ರಣ ಸಾಧಿಸಬೇಕು, ಮನುಷ್ಯನಿಗೆ ಅತಿಯಾದ ಯೋಚನೆ ಒಳ್ಳೆಯದಲ್ಲವೆಂಬ ಪಾಠಗಳಿಗೆ ಈ ಕತೆ ನಿದರ್ಶನವಾಗಿದೆ.

4. ಒಲವೋ? ಕುಲವೋ?: ಶೀರ್ಷಿಕೆಯಂತೆ ಇಲ್ಲಿ ಪ್ರೀತಿ ಮುಖ್ಯವೋ, ಇಲ್ಲ ಜಾತಿ ಮುಖ್ಯವೋ ಎಂಬುದರ ತುಡಿತವಿದೆ. ಇಲ್ಲಿ ವೈಷ್ಣವ/ಬ್ರಾಹ್ಮಣ ಕುಲದ ಶಠಗೋಪ ಎಂಬ ವ್ಯಕ್ತಿಯು ವೀಳೆದೆಲೆಯನ್ನು ಮಾರುವ ಕುಲದ ರತ್ನಿಯ ಮೇಲೆ ಪ್ರೇಮವಾಗುತ್ತದೆ. ಇದು ಅಲ್ಲಿನ ಸಮಾಜದಲ್ಲಿ ದೋಷ, ತಪ್ಪು ಎಂಬಂತೆ ಕಾಣುತ್ತದೆ ಎಂಬುದೇ ಇಲ್ಲಿನ ಕಥೆಯಾಗಿದೆ. ಶಠಗೋಪ ಬ್ರಾಹ್ಮಣ ಕುಲದವನು. ತಂದೆ ತಾಯಿ ಇಬ್ಬರು ಇಲ್ಲ. ಅಣ್ಣನ ಆಶ್ರಯದಲ್ಲಿ ಇರುತ್ತಾನೆ. ಅಣ್ಣ ರಾಮನೇ ತಂದೆ, ಅವನ ಅತ್ತಿಗೆಯೇ ತಾಯಿ. ಶಠಗೋಪ ಸಂಸ್ಕೃತ ಅಭ್ಯಾಸ ಮಾಡಿ ಪೌರೋಹಿತ್ಯಕ್ಕೆ ಬೇಕಾದ್ದನ್ನು ಕಲಿಯುತ್ತಿದ್ದ. ಒಂದು ದಿನ ಅತ್ತಿಗೆ ವೀಳೆಯದೆಲೆಯ ವರ್ತನೆಯವಳು ಬಂದರೆ ಎಲೆ ತೆಗೆಯಲು ಶಠಗೋಪನಿಗೆ ಹೇಳಿದಳು. ಅವಳು ಅಡುಗೆಯ ಕೆಲಸದಲ್ಲಿ ನಿರತರಾಗಿರುತ್ತಾಳೆ. ಶಠಗೋಪ ಹೊರಗೆ ಬಂದು ಎದುರಿಗಿದ್ದ ವೀಳೆಯದೆಲೆಯವಳನ್ನು ನೋಡಿದ.

ಅವಳು ಸಾಧಾರಣದ ಹೆಣ್ಣು, ರತಿಯಲ್ಲ. ಚಪ್ಪನ್ನಾರು ದೇಶದಲ್ಲಿ ಸಿಗದಂಥ ಚೆಲುವೆಯಲ್ಲ ಸುಮಾರು ಎತ್ತರದ ಎಣ್ಣೆಗೆಂಪಿನ ಹೆಣ್ಣು. ಧೂಳು ಹತ್ತಿದ ಸೀರೆ, ಕೈಗೆ ಬೆಳ್ಳಿಯ ಕಡಗ. ಕತ್ತಿನಲ್ಲಿ ಕರಿಮಣಿ, ಹವಳ, ಕಿವಿಯಲ್ಲಿ ಬೆಂಡೋಲೆ, ತೈಲ

ಹೆಚ್ಚಿದ ತಲೆಕೂದಲು ತುರುಬಿನ ತುಂಬ ಹೂವು. ನಗುಮುಖದಲ್ಲಿ ಮೂರು ಕಾಸಿನಷ್ಟಗಲ ಕುಂಕುಮದ ಬಟ್ಟು, ಸಂಜೆಗೆಂಪನ್ನು ಎರಚುವ ತುಂಬುಲದ ತುಟಿ. ಹದಿನೇಳರ ಪ್ರಾಯವಿರಬಹುದು. ಎಲ್ಲಕ್ಕೂ ಮೇಲಾಗಿ ಮುಖದ ತುಂಬ ಎರಡು ಕಣ್ಣು. ಕ್ಷಣರುಚಿಯ ಕಿಡಿಯೆರಡು ಚಿರರುಚಿಗಳಾದಂಥ ಕಣ್ಣು. ಹೃದಯದ ಆಳವನ್ನು ತಿಳಿಯಲು ನೆರವಾಗುವ ಕಣ್ಣು, ಅವಳ ಹೆಸರು ರತ್ನಿ, ಎಲೆಯಿಡುತ್ತಾ ತಲೆಯೆತ್ತಿದಳು.

ಎದುರಿನಲ್ಲಿ ಕಂಡ ಕೃಷ್ಣಕಾಯದ ಶಠಗೋಪ, ನೀರು ಕಾರುವ ಊಟೆಯಂತೆ ತೇಜಸ್ಸು ಕಾರುವ ಗುಂಡುಮುಖದಲ್ಲಿ ಎತ್ತಿಕಾಣುವ ಬಿಳಿಯ ತಿರುಮಣ್ಣು, ಹಳದಿಯ ಶ್ರೀ ಚರಣ, ಗರಿ ಹಿಡಿದ ಲುಂಗಿ ಸುತ್ತಿದ ಬೆಳ್ಳನೆಯ ಅಗಲದಂಚಿನ ಪಂಚೆ, ಎದೆ ಮೇಲೆ ಮಲಗಿರುವ ಮೂರೆಳೆಯ ಜನಿವಾರ, ಎಲ್ಲದಕ್ಕೂ ಮೇಲಾಗಿ ಇರುಳ ನೆರಳಿನ ಕೆಳಗೆ ಹೊಳೆಯುವ ಎರಡು ಶುಕ್ರಗ್ರಹಗಳೆಂಬ ಭ್ರಾಂತಿಯನ್ನುಂಟು ಮಾಡುವ ಕಣ್ಣುಗಳು ಎದೆಯೊಲವಿನ ಹೊನಲುಕ್ಕಿ ಕೋಡಿಹರಿದು ಹೊರಬರುವ ತೋಳುಗಳು. ಶಠಗೋಪ ಮತ್ತು ರತ್ನಿ ಒಬ್ಬರನ್ನೊಬ್ಬರು ನೋಡಿದರು ಒಬ್ಬರಿಗೊಬ್ಬರು ಮನಸ್ಸು ಸೋತರು, ಇವರಿಬ್ಬರ ಮನಸೋತಿದ್ದು ದೇವರ ಮಾಯೆ ಎನ್ನಬಹುದು.

ತಿಂಗಳಾಗುವುದರೊಳಗೆ ಶಠಗೋಪ ರತ್ನಿಯ ಪೂರ್ವೋತ್ತರವೆಲ್ಲವನ್ನು ಕೇಳಿ ತಿಳಿದನು. ರತ್ನಿಯು ತಂದೆ ತಾಯಿಗಳನ್ನು ಚಿಕ್ಕಂದಿನಲ್ಲಿಯೇ ಕಳೆದುಕೊಂಡಿದ್ದಳಂತೆ. ಆಗಿನಿಂದ ಊರ ಹೊರಗಿನ ತೋಟದಿಂದ ಎಲೆ ತಂದು ಮಾರಿ ಅದರಿಂದ ಜೀವನ ಜರುಗಿಸುತ್ತಿದ್ದಳಂತೆ. ಪ್ರಪಂಚದಲ್ಲಿ ಅವಳವರು ಎನ್ನುವವರು ಯಾರೂ ಇರಲಿಲ್ಲವಂತೆ. ಶಠಗೋಪನು ತನ್ನ ಕುಟುಂಬದ ಅವಳಿಗೆ ಹೇಳಿದನ್ನು ಇಬ್ಬರು ಒಬ್ಬರನ್ನೊಬ್ಬರು ಅರಿತು ಎರಡು ಮನಸ್ಸು ಒಂದಾಗಿಯೇ ಎರಡು ತಿಂಗಳಾಯಿತು.

ಒಂದು ದಿನ ರಾಮಾನುಜ ತನ್ನ ತಮ್ಮನಾದ ಶಠಗೋಪನಿಗೆ ಬುದ್ಧಿ ಹೇಳಲು ಮೊದಲು ಮಾಡಿ ಮೂರು ಗಂಟೆಯಾಗಿತ್ತು. ಶಠಗೋಪ ರತ್ನಿ ಇಬ್ಬರು ಒಟ್ಟಿಗೆ ಮಾತನಾಡುತ್ತಿದ್ದ ಸುದ್ದಿ ಊರಲ್ಲೆಲ್ಲ ಹಬ್ಬಿತ್ತು ಶಠಗೋಪನ ಮೇಲೆ ಕಳಂಕ ಬಂದಿತು.

"ಶಠಗೋಪ! ನಮ್ಮ ವಂಶದ ಹೆಸರನ್ನು ಹೀಗೆ ಕೆಡಿಸಬಹುದೇ? ಶ್ರೀ ರಂಗಾಚಾರ್ಯರ ಮಗನಾಗಿ ಹೀಗೆ ಮಾಡಬಹುದೆ? ಅವಳಿಗೂ ನಿನಗೂ ಎಂತಹ ಪ್ರೀತಿ? ಈಗ ಇಪ್ಪತ್ತು ವರುಷಗಳ ಕೆಳಗೆ ತಾಯಿಯವರೂ ತೀರಿಹೋದಾಗ ನಿನ್ನನ್ನು ಅರಿಯದವನು, ಚಿಕ್ಕವನಾಗಿದ್ದ, ನಿನ್ನನ್ನು ಇಷ್ಟು ದಿನ ಸಾಕಿ ದೊಡ್ಡವನನ್ನಾಗಿ ಮಾಡಿದ್ದಕ್ಕೆ ಇದೆಯೆ ನೀನು ಮಾಡುವ ಕೆಲಸ? ಊರಿನವನೆದುರಿನಲ್ಲಿ ನಾನು ತಲೆ ತಗ್ಗಿಸಬೇಕಾಗಿದೆಯಲ್ಲ, ಶಠಗೋಪ! ನೀನಿನ್ನೂ ಚಿಕ್ಕವನು ನಿನಗೆ ಯಾರೋ ಈ ಕೆಟ್ಟಕಾರ್ಯಕ್ಕೆ ಹೋಗುವಂತೆ ಹೇಳಿಕೊಟ್ಟಿರಬೇಕು. ಶಠಗೋಪ ಅಣ್ಣನ ಬಾಯಿಂದ

ನೊಂದ ನುಡಿಗಳನ್ನು ಎಂದೂ ಕೇಳಿರಲಿಲ್ಲ ಅದನ್ನು ಕೇಳಿ ಕಣ್ಣಿನಲ್ಲಿ ನೀರು ತುಂಬಿತು.

ಅಣ್ಣನ ಮಾತಿಗೆ ಶಠಗೋಪ ಹೀಗೆ ನುಡಿದನು, "ಅಣ್ಣಾ! ನಿಮಗೆ ದುಃಖಕೊಡಬೇಕೆಂದು ನನಗೆ ಮನಸ್ಸಿಲ್ಲ ನನಗೆ ಯಾರೂ ಹೇಳಿಕೊಟ್ಟಿಲ್ಲ, ಆದರೆ ಆ ಹುಡುಗಿಯನ್ನು ಕಂಡ ಕ್ಷಣದಿಂದ ಅದೇಕೆ ಹೀಗೆ ಎಂಬುದು ನನಗೆ ಗೊತ್ತಿಲ್ಲ. ನನ್ನ ಮನಸ್ಸು ಆಯಸ್ಕಾಂತದ ಬಳಿಯ ಕಬ್ಬಿಣದಂತೆ ಅವಳ ಕಡೆಗೇ ವಾಲುತ್ತಿದೆ" ಎಂದು ಹೇಳಿದನು. ಆಗ ಅವನ ಅಣ್ಣ ಶಠಗೋಪನಿಗೆ ನೀನು ಮದುವೆಮಾಡಿಕೊಳ್ಳಬೇಕೆಂಬ ಆಸೆಯಿದ್ದರೆ ವೇದಾಂತ ದೇಶಿಕನ ನಾದಿನಿಯಿಲ್ಲವೇ? ಎಂದನು. ಆಗ ಶಠಗೋಪ "ಅಣ್ಣ! ನೀವು ಬೇರೆ ಭಾವಿಸಬೇಡಿ, ಆ ಹುಡುಗಿಯನ್ನು ಮದುವೆಯಾಗಬೇಕೆಂದಾಗಲಿ, ಅವಳಲ್ಲಿ ನೆರೆಯಬೇಕೆಂದಾಗಲಿ ನನಗೆ ಆಸೆ ಇಲ್ಲ, ನನಗೆ ಮದುವೆಯೇ ಬೇಡ, ಆದರೆ ಅವಳನ್ನು ನೋಡುತ್ತಿರಬೇಕು, ಅವಳ ಮಾತುಗಳನ್ನು ಕೇಳುತ್ತಿರಬೇಕು ಅಷ್ಟೆ.. ಅವಳಿಗೂ ಅದೇ ಆಸೆ ಇಷ್ಟಿಲ್ಲದೆ ಹೆಚ್ಚಿನ ಬಯಕೆ ಇಲ್ಲ. ಒಬ್ಬರ ಕೂಡ ಒಬ್ಬರು ಮಾತನಾಡಿ ಒಬ್ಬರನ್ನು ಒಬ್ಬರು ನೋಡಿದರೆ ಅಷ್ಟರಲ್ಲಿ ದೋಷವೇನುಂಟು" ಎಂದು ನುಡಿದ. ಆದರೆ ಜನರ ಬಾಯಿಗೆ ಹೆದರಬೇಕಪ್ಪ ಎಂದು ರಾಮಾನುಜ ನುಡಿದ. ಬಾಯಿಗೆ ಬಂದ ಹಾಗೆ ಮಾತನಾಡುವ ಜನಗಳು ನಮ್ಮ ಸುಖ ದುಃಖಗಳಲ್ಲಿ ನೆರವಾಗುವವರೇನೂ!" ಎಂದ ಶಠಗೋಪ ಆಗ ರಾಮಾನುಜನಿಗೆ ಸಿಟ್ಟುಬಂತು.

ಜನರ ಮಾತು ಬೇಡ ನಾನು ನಿನಗೆ ತಂದೆಯ ತರ ನನ್ನ ಮಾತು ಕೇಳು ಅವಳನ್ನು ನೀನು ಮಾತನಾಡಿಸಕೂಡದು ಅವಳ ವರ್ತನೆಯನ್ನು ತಪ್ಪಿದ್ದೇನೆ ಎಂದ. ರಾಮಾನುಜ ಹೇಳಿದ ಇದಕ್ಕೆ ಶಠಗೋಪನ ಮನಸ್ಸು ನೊಂದಿತು. ತನ್ನಿಂದ ಅವಳ ವರ್ತನೆ ತಪ್ಪಿತ್ತಲ್ಲಾ ಎಂದು ನೊಂದುಕೊಂಡ. "ಪ್ರೀತಿಗೆ ಜಾತಿ ಬೇರೆಯೆ!" ಎಂದ ಶಠಗೋಪ. ಅದು ಸಂಕಟದಿಂದ ಅಂದ ಮಾತಾಗಿತ್ತು. ಅಷ್ಟು ಹೊತ್ತಿಗೆ ಕಣ್ಣೀರು ಸುರಿಸುತ್ತ ಶಠಗೋಪನ ಅತ್ತಿಗೆ ಬಂದು, "ಏನು ಶಠಗೋಪ! ಹೀಗೆ ಮಾಡಬಹುದೆ! ಊರಿನವರೆಲ್ಲ ನಮ್ಮನ್ನು ಹೀಯಾಳಿಸುವಂತಾಯಿತೆ!" ಎಂದರು. ಹೀಗೆ ಶಠಗೋಪ ಅವನಿಗಾದ ಸಂಕಟ ಹೊಟ್ಟೆಯೊಳಗೆ ಅದುಮಿ ಹಿಡಿದಿದ್ದ, ಅಣ್ಣ ಮತ್ತು ಅತ್ತಿಗೆಯ ಕಣ್ಣೀರನ್ನು ಕಂಡು ಅವನು ಮಗುವಿನಂತೆ ಅಳುತ್ತ "ಮಾಡಿದ್ದು ತಪ್ಪಾಯಿತು! ತಪ್ಪಾಯಿತು!" ಎಂದು ಗೋಗರೆದನು. ಆಗ ರಾಮಾನುಜನಿಗೆ ತಮ್ಮನನ್ನು ನೋಡಿ ಅಳುವೂ ಸಂತೋಷವೂ ಒಟ್ಟಾಗಿ ಉಂಟಾಯಿತು. ಆಗ ಸ್ವಂತ ಬುದ್ಧಿಯಿಂದ ಹೀಗೆ ಮಾಡಲಿಲ್ಲ, ಹೋಗಲಿ ಬಿಡು. ಹಿಂದಿನದೆಲ್ಲ ಮರೆತು, ಸ್ನಾನ ಮಾಡಿ ದೇವರಿಗೆ ಪೂಜೆ ಮಾಡಿ ಬಾ ಎಂದನು. ಹಾಗೆಯೇ ತಿರುನಾರಾಯಣನ ಮನೆಗೆ ಊಟಕ್ಕೆ ಹೋಗಬೇಕು ಎಂದು ಸಂತೈಸಿ ಕಳುಹಿಸಿ ತಮ್ಮನು ದಾರಿಗೆ ಬಂದನೆಂದು ಹಿಗ್ಗಿದನು.

ಶಠಗೋಪನಿಗೆ ಎಷ್ಟೆಷ್ಟೇ ತಡೆದರೂ ರತ್ನಿಯ ನೆನಪನ್ನು ಅಳಿಸಲು ಸಾಧ್ಯವಾಗಲಿಲ್ಲ. ಒಮ್ಮೆಯೋ ಸಾಧ್ಯವಾಗುವುದೇ? ಸ್ನಾನ ಮಾಡುತ್ತಿರುವಾಗ ರತ್ನಿಯ ಕಣ್ಣೀರಿನಲ್ಲಿ ತಾನು ಮಿಂದಂತೆ ಚಿತ್ರ ಸಂಧ್ಯಾವಂದನೆಯಲ್ಲಿ ರತ್ನಿಯ ಹೆಸರಿನ ಗಾಯಿತ್ರಿ ದೇವರಿಗೆ ಪುಷ್ಪ ಸಮರ್ಪಿಸುವಾಗ ಹೂಗಳನ್ನು ರತ್ನಿಯ ತುರುಬಿಗೇರಿಸಿದಂತೆ ಭಾವನೆ ಶಠಗೋಪನಿಗೆ ಆಗುತ್ತಿತ್ತಂತೆ. ಆ ಮಾತುಗಳನ್ನು ಕೇಳಿಸಿಕೊಂಡ ಅಣ್ಣತಮ್ಮಂದಿರು ಒಬ್ಬರ ಮುಖವನ್ನು ಒಬ್ಬರು ನೋಡಿದರು. ರಾಮಾನುಜ ಮುಖ ತಗ್ಗಿಸಿದ, ಇಬ್ಬರೂ ಮಾತನಾಡದೆ ಮುಂದಕ್ಕೆ ನಡೆದರು.

ಅಣ್ಣನೊಡನೆ ತಲೆ ಬಗ್ಗಿಸಿಕೊಂಡು ಹೋಗುತ್ತಿದ್ದ ಶಠಗೋಪ ರತ್ನಿಯ ಮಾತನ್ನು ಕೇಳಿ ಸರಕ್ಕನೆ ತಿರುಗಿದ, ದೂರದಲ್ಲಿ ಒಂದು ಅಂಗಡಿಯ ಮುಂದೆ ರತ್ನಿ ಎಲೆ ಮಾರುತ್ತ ನಿಂತಿದ್ದಳು. ಆರಾಧ್ಯ ದೇವತೆಯ ಎದುರಿನಲ್ಲಿ ರತ್ನಿಯ ತಿರುಗಿ ಶಠಗೋಪನನ್ನು ಕಂಡಳು, ಎಲೆ ಇದ್ದಲಿಯೇ ಬಿಟ್ಟು 'ಐನೋರಾ!' ಎಂದು ಹೆಜ್ಜೆ ಮುಂದಿಟ್ಟಳು, ಶಠಗೋಪ ಅವಳ ಬಳಿ ಸೇರಿದ ರಾಮಾನುಜ ಸ್ತಂಭಿತನಾಗಿ ಬಿಟ್ಟ.

"ರತ್ನಿ! ಮೂರು ದಿನದಿಂದ ಏಕೆ ಬರಲಿಲ್ಲ?" ಎಂದು ಶಠಗೋಪ ಕೇಳಿದ. ರತ್ನಿಯ ಕಣ್ಣುಗಳು ಶಠಗೋಪನನ್ನು ಒಳಕ್ಕೆ ಸೆಳೆದುಕೊಳ್ಳುತ್ತಿದ್ದವು. ಮಾತು ಕಳೆದುಕೊಂಡಿದ್ದ ರಾಮಾನುಜ ದೂರದಿಂದಲೇ 'ಶಠಗೋಪ!, ಶಠಗೋಪ!' ಎಂದ. ರತ್ನಿಯಲ್ಲಿ ಲೀನನಾಗಿದ್ದ ಶಠಗೋಪನಿಗೆ ಅಣ್ಣನ ಕೂಗು ಮುಟ್ಟಲಿಲ್ಲ ಮತ್ತೆ ಕೂಗಿದ. ತಮ್ಮ ಅಲುಗಲಿಲ್ಲ, ರಾಮಾನುಜ ಕೊಂಚ ಪೌರುಷವಾಗಿಯೇ 'ಶಠಗೋಪ!' ಎಂದ ಅವನು ಕದಲಲಿಲ್ಲ.

ರಾಮಾನುಜನಿಗೆ ತಮ್ಮನನ್ನು ತಿರುಗಿಸಲು ಆಗಲಿಲ್ಲ. ಕೊನೆಗೆ ರೋಸಿಹೋಗಿ. "ಇಂದಿನಿಂದ ನೀನು ನನ್ನ ತಮ್ಮನಲ್ಲ" ಎಂದು ಹೊರಟುಹೋದ. ಸುತ್ತ ನೆರೆದಿದ್ದ ಜನರು ಕೆಲವರು ಗೇಲಿ ಮಾಡಿದರು, ಕೆಲವರು ಮನಸ್ಸಿಗೆ ಬಂದ ಹಾಗೆಲ್ಲ ಮಾತನಾಡಿದರು. ಒಲವಿನ ಹೊನಲಿಗೆ ಈ ಹಾಳು ಅಣೆಗಳೆ! ಶಠಗೋಪ ತನ್ನ ಒಲವಿನ ಅಧಿದೇವತೆಯಾದ ರತ್ನಿಯ ಕಾಲಬಳಿ ಮಂಡಿಯೂರಿ, ಅವಳ ಧೂಳುಮುಚ್ಚಿದ ಸೆರಗಿನಲ್ಲಿ ಮುಖವಿಟ್ಟು "ಕುಶಲ ಭೂಮಿಯಲ್ಲಿ ಕರೆದ ವೃಷ್ಟಿಯ ತೆರನಂತೆ ಅವರೆತ್ತ ಬಲ್ಲರೆನ್ನ ಸುಖದುಃಖವ" ಎಂದು ಮೆಲ್ಲಮೆಲ್ಲನೆ ಉಸುರಿದ.

ರತ್ನಿಯ ಮುಖದಲ್ಲಿ ಒಂದು ಕಳೆಬಂದಿತ್ತು. ಅವಳ ತುಟಿಗಳು ಅದಿರುತ್ತಿದ್ದುವು. ಅವಳ ನಡುಗುವ ಬೆರಳುಗಳು ಅವನ ತಲೆಯನ್ನು ನೇವರಿಸುತ್ತಿದ್ದವು. ಮುತ್ತಿನ ಮಣಿಗಳಂತೆ ರತ್ನಿಯ ಕಣ್ಣೀರಿನ ಹನಿಗಳು ಶಠಗೋಪನ ತಲೆಯ ಮೇಲೆ ಚೆಲ್ಲಿದವು. ಹೀಗೆ ರತ್ನಿ ಮತ್ತು ಶಠಗೋಪರ ಪ್ರೇಮಕತೆಯನ್ನು ತಿಳಿಯಬಹುದು. ಇಲ್ಲಿ ಪ್ರೀತಿ ಮುಖ್ಯವೋ ಜಾತಿ ಮುಖ್ಯವೋ ಎಂಬುದಕ್ಕೆ ಶಠಗೋಪ ಪ್ರೀತಿಯೇ ಮುಖ್ಯ ಎಂಬುವಂತೆ ತಿಳಿಸಿದ್ದಾನೆ. ಇದನ್ನು ಹೇಳುತ್ತಿದ್ದ ಲೇಖಕರು "ಆಗಿಹೋಯಿತೆ ಕತೆ?"

ಎಂದು ಕಂಠಿ ಲೇಖಕರಿಗೆ ಕೇಳಿದನು. ಆಗ ಅವರು "ಆಗಿ ಹೋಗದೆ ಮತ್ತೆ?" ಎಂದರಂತೆ. ಅದಕ್ಕೆ ಏನು ಕತೆಯಯ್ಯ? ಶುದ್ಧ ಅಸಂಭವ! ಹೀಗೆ ಎಲ್ಲಾದರೂ ನಡೆಯೊದುಂಟೆ?... ಎಂದರಂತೆ.

ಕಟ್ಟಿದ್ದಾರೋ ಕಟ್ಟಿಲ್ಲವೋ ಗೊತ್ತಿಲ್ಲ ಕಪಿಸಂತತಿ/ಕೋತಿಗಳ ಗುಂಪು ಸಮುದ್ರಕ್ಕೆ ಸೇತುವೆಯನ್ನು, ವಾಮನನು ಆಕಾಶದೆತ್ತರಕ್ಕೆ ಏರಿ ನಿಂತನೊ ಇಲ್ಲವೊ, ಹರನ ಗಂಟಲ ಮೇಲೆ ಅರ್ಜುನ ತನ್ನ ಕಾಲನಿಟ್ಟನೊ ಇಲ್ಲವೊ (ಅರ್ಜುನ ಮಲ್ಲಗಾಳಗದಲ್ಲಿ ಹರನನ್ನು ಸೋಲಿಸಿ) ಇದೆಲ್ಲ ನಡೆದವೊ ಇಲ್ಲವೊ ಕಂಡವರಾರು? ಆದರೆ ಕವಿಗಳು ತಮ್ಮ ಕೃತಿಬಂಧಗಳೊಳಗೆ ಈ ಸನ್ನಿವೇಶಗಳನ್ನು ಅದ್ಭುತವಾಗಿ ಸೃಷ್ಟಿಸಿದರಲ್ಲವೇ? ಆಹಾ! ಅವರ ಕಾವ್ಯ ಸೃಷ್ಟಿಯ ಸಾಮರ್ಥ್ಯ ಅದೆಂತಹುದೋ! ಎಂಬುವುದಾಗಿ ಲೇಖಕರು ಹೇಳಿದರು. ಅದನ್ನು ಕೇಳಿದ ಕಂಠಿ ಪೆಚ್ಚಾದ!

ಹೀಗೆ ಮೂಲವೆಲ್ಲಕ್ಕು ಮನಸು, ಅವಳ ಗಂಡ, ಮಾಮಣ್ಣ ಮತ್ತು ಒಲವೋ? ಕುಲವೋ ಎಂಬ ಕಥೆಗಳು ಹೊಸದೃಷ್ಟಿಕೋನದಿಂದ ಕೂಡಿದ್ದು, ಬದುಕಿನ ಸಮಸ್ಯೆಗಳನ್ನು ವಿಡಂಬನಾತ್ಮಕವಾಗಿ ವಿವರಿಸುತ್ತಾ, ಎಚ್ಚರಿಕೆಯನ್ನು ನೀಡುತ್ತಾ ಸಾಗುವುದನ್ನು ಕಾಣಬಹುದಾಗಿದೆ. 'ಕರಿಯ ಕಂಬಳಿ ಮತ್ತು ಇತರ ಕಥೆಗಳು' ಕಥಾಸಂಕಲನವು ಜೀವನದ ಎಷ್ಟೋ ಸಮಸ್ಯೆಗಳಿಗೆ ಪರಿಹಾರವನ್ನು ನೀಡುತ್ತಾ, ಬುದ್ಧಿವಂತಿಕೆಯ ಬದುಕಿನ ಅನಾವರಣ ಮಾಡುತ್ತದೆ.

**ಕೊನೆಟಿಪ್ಪಣಿ:**

1. ಜಿ.ಪಿ. ರಾಜರತ್ನಂ: ಕರಿಯ ಕಂಬಳಿ ಮತ್ತು ಇತರೆ ಕಥೆಗಳು, ಆನಂದ್ ಬ್ರದರ್ಸ್, ಬೆಂಗಳೂರು, 1915.

